# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 283

ಸದಸ್ಯರ ಹೆಸರು : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 15.12.2021

ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸರ್ಕಾರವು ಕರ್ನಾಟಕ ಭೂ ಕಂದಾಯ ಕಾಯಿದೆ 1964ರ ಪ್ರಕರಣ 94ಎ (4)ಕ್ಕೆ ತಿದ್ದುಪಡಿಯ ಮೂಲಕ 17.03.2018 ರಿಂದ 16.03.2019ರವರೆಗೆ ನಮೂನೆ-57ರಲ್ಲಿ ಅಕ್ರಮ ಸಕ್ರಮದಡಿಯಲ್ಲಿ ಅರ್ಜಿಯನ್ನು ಸಲ್ಲಿಸಲು ಅವಕಾಶ ಕಲ್ಪಿಸಿದ್ದು ಈ ಅವಧಿಯಲ್ಲಿ ನೋಂದಾಯಿತ ಅಂಚೆಯ ಮೂಲಕ ಇ-ಮೇಲ್ ಮೂಲಕ ಸ್ವೀಕೃತವಾದ ಅರ್ಜಿಗಳ ಸಂಖ್ಯೆ ಎಷ್ಟು; ಅವುಗಳನ್ನು ನಮೂನೆಯ ವಹಿಯಲ್ಲಿ ದಾಖಲಿಸಿ ತಂತ್ರಾಂಶದಲ್ಲಿ ಅಳವಡಿಸಲಾಗಿದೆಯೇ; | ಸರ್ಕಾರಿ ಜಮೀನುಗಳಲ್ಲಿನ ಅನಧಿಕೃತ ಸಾಗುವಳಿಯನ್ನು ಸಕ್ರಮಗೊಳಿಸಲು ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ರ ಕಲಂ 94-ಎ(4) ಗೆ ತಿದ್ದುಪಡಿ ತರಲಾಗಿದ್ದು, ತತ್ಸಂಬಂಧ ಕರ್ನಾಟಕ ಭೂ ಕಂದಾಯ ನಿಯಮಗಳು, 1966 ರ ನಿಯಮ 108 ಸಿಸಿಸಿ ಯನ್ನು ಸೇರ್ಪಡಿಸಿ, ಹೊಸದಾಗಿ ನಮೂನೆ 57 ರ ಅರ್ಜಿಗಳನ್ನು ಸ್ವೀಕರಿಸಲು ದಿನಾಂಕ: 16.03.2019 ರವರೆಗೆ ಅವಕಾಶ ಕಲ್ಪಿಸಲಾಗಿತ್ತು. ಅದರಂತೆ, ಅರ್ಜಿದಾರರು ಖುದ್ದಾಗಿ ಅರ್ಜಿ ಸಲ್ಲಿಸಬೇಕಾಗಿರುತ್ತದೆ.<br>ಆದರೆ, ನೋಂದಾಯಿತ ಅಂಚೆಯ ಮೂಲಕ ಮತ್ತು ಇ-ಮೇಲ್ ಮೂಲಕ ಅರ್ಜಿಗಳನ್ನು ಸಲ್ಲಿಸಲು ಅವಕಾಶ ಇರುವುದಿಲ್ಲ. |
| ಆ) | ಕಾಯಿದೆಯನ್ನು ಅರ್ಥೈಯಿಸಿಕೊಳ್ಳುವಲ್ಲಿ ವಿಫಲರಾಗಿರುವ ಮತ್ತು ರೈತರನ್ನು ಅವರ ಹಕ್ಕಿನಿಂದ ವಂಚಿತರಾಗಿಸಿ ಗಂಭೀರ ಕರ್ತವ್ಯ ಲೋಪವನ್ನು ಮಾಡಿದ ಅಧಿಕಾರಿಗಳ ಮೇಲೆ ಸರ್ಕಾರದಿಂದ ಕೈಗೊಂಡ ಕ್ರಮವೇನು; ಇಲ್ಲವಾದ್ದಲ್ಲಿ, ಇದಕ್ಕೆ ಕಾರಣವೇನು; | ಇಂತಹ ಯಾವುದೇ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಇ) | ಅವಕಾಶದಿಂದ ವಂಚಿತರಾದ ರೈತರಿಗೆ ಅರ್ಜಿಯನ್ನು ಸಲ್ಲಿಸಲು ಮತ್ತೊಮ್ಮೆ ಅವಕಾಶವನ್ನು ಕಲ್ಪಿಸಲಾಗುತ್ತದೆಯೇ; ಇಲ್ಲವಾದಲ್ಲಿ, ಆಗಿರುವ ಅನಾಹುತಗಳನ್ನು ಹೇಗೆ ಪರಿಹರಿಸಲಾಗುವುದು? | ಅವಕಾಶದಿಂದ ವಂಚಿತರಾದ ರೈತರಿಗೆ ಮತ್ತೊಮ್ಮೆ ಅರ್ಜಿ ಸಲ್ಲಿಸಲು ಕಾಲಾವಕಾಶ ವಿಸ್ತರಿಸುವ ಬಗ್ಗೆ ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಗುತ್ತಿದೆ. |

ಸಂಖ್ಯೆ: ಆರ್‌ಡಿ 224 ಎಲ್‌ಜಿಕ್ಯೂ 2021 (ಇ)

(ಆರ್.ಅಶೋಕ)
ಕಂದಾಯ ಸಚಿವರು.